ಉಲ್ಲೇಖ:
ಸೆಂಟರ್ ಪಾರ್ ಪೊಲಿಸಿ ರಿಸರ್ಚ್ ಮತ್ತು ನಮತಿ, ,
ಸಮುದಾಯ ಮಟ್ಟದ ಪರಿಸರ ನ್ಯಾಯ ವೃತ್ತಿಗಾರರಿಗಾಗಿ
ಕಾನೂನು ಮತ್ತು ಆಡಳಿತಾತ್ಮಕ ಪರಿಹಾರದ ಕೈಪಿಡಿ
ಸಿ.ಪಿ.ಅರ್- ನಮತಿ ಪರಿಸರ ನ್ಯಾಯ ಯೋಜನೆ
ನವ ದೆಹಲಿ.



ಕನ್ನಡ ಅನುವಾದ: ಕಮಲಾ ಅನಿಲಕುಮಾರ್
ವಿನ್ಯಾಸ: ರೇ ಝಕಾರಿಯಾ
ಮುದ್ರಣ: ಪ್ರಿಂಟ್ ಫ಼ೋರ್ಸ್

'ದುಲೀಪ್ ಮಥಾಯ್ ನೇಚರ್ ಕನ್ಸರ್ವೇಶನ್ ಟ್ರಸ್ಟ್' (ಡಿ ಎಮ್ ಎನ್ ಸಿ ಟಿ) ನಿಂದ
ಈ ಸಂಶೋಧನಾ ಕಾರ್ಯವು ನೆರವು ಪಡೆದಿರುತ್ತದೆ.

01

# ಅಂತರ್ಜಲ ಉತ್ಪಾಟನಕ್ಕೆ / ಹೊರತೆಗೆಯುವಿಕೆಗೆ ಇರುವ ಕಟ್ಟಳೆ

## ಅಂತರ್ಜಲ ಉತ್ಪಾಟನ / ಹೊರತೆಗೆಯುವುದು ಎಂದರೇನು?

ಅಂತರ್ಜಲ ಉತ್ಪಾಟನ / ಆಹರಣವು, ಭೂಮಿಯೊಳಗಿನ ಮೂಲಗಳಿಂದ ನೀರನ್ನು ತಾತ್ಕಾಲಿಕವಾಗಿ ಅಥವಾ ಶಾಶ್ವತವಾಗಿ ಹೊರತೆಗೆಯುವ ಪ್ರಕ್ರಿಯೆ ಆಗಿರುತ್ತದೆ. ಎಲ್ಲಾ ಕೈಗಾರಿಕೆ / ಉದ್ಯಮಗಳು ಅಂತರ್ಜಲವನ್ನು ಹೊರತೆಗೆಯಲು 'ನೊ ಅಬ್ಜಕ್ಷನ್' ಪ್ರಮಾಣಪತ್ರವನ್ನು (N O C) ಕಡ್ಡಾಯವಾಗಿ ಪಡೆಯ ಬೇಕು.

## ಯಾವ್ಯಾವ ಸಂಘಗಳಿಗೆ ಜಲಮಾಲಿನ್ಯದ ಮೇಲ್ವಿಚಾರಣೆಯ ಜವಾಬ್ದಾರಿ ಇರುತ್ತದೆ?

| | |
|---|---|
| **ಕೇಂದ್ರ ಮಟ್ಟದಲ್ಲಿ** | • ಕೇಂದ್ರ ಅಂತರ್ಜಲ ಪ್ರಾಧಿಕಾರ, ದೆಹಲಿ |
| **ರಾಜ್ಯ ಮಟ್ಟದಲ್ಲಿ** | • ಕೇಂದ್ರ ಅಂತರ್ಜಲ ಮಂಡಲಿ (Central Groundwater Board - CGWB), ಪ್ರಾದೇಶಿಕ ಕಛೇರಿ, ಭುಭನೇಶ್ವರ್;<br>ಕರ್ನಾಟಕ ಅಂತರ್ಜಲ ಪ್ರಾಧಿಕಾರ;<br>ಸಿ ಜಿ ಡಬಲ್ಯು ಬಿ (CGWB) ಪ್ರಾದೇಶಿಕ ಕಛೇರಿ, ರಾಯ್ ಪುರ್;<br>CGWB ಪ್ರಾದೇಶಿಕ ಕಛೇರಿ, ಅಹ್ಮದಾಬಾದ್ |

## ಅಂತರ್ಜಲವನ್ನು ಹೊರ ತೆಗೆಯುವುದನ್ನು ನಿಯಂತ್ರಿಸಲು ಪ್ರದೇಶಗಳನ್ನು ಹೇಗೆ ವಿಭಜಿಸಲಾಗುತ್ತದೆ?

CGWA 162 ಪ್ರದೇಶಗಳನ್ನು 'ಅಧಿ ಸೂಚಿಸಲ್ಪಟ್ಟ ಪ್ರದೇಶಗಳು' ಎಂದು ಗುರುತಿಸಿದೆ..

'ಅಧಿ ಸೂಚಿಸಲ್ಪಟ್ಟ ಪ್ರದೇಶಗಳ' ಹೊರಗಿರುವ ಪ್ರದೇಶಗಳನ್ನು 'ಅಧಿ ಸೂಚಿಸಲ್ಪಡದ ಪ್ರದೇಶಗಳು' ಎಂದು ಕರೆಯಲಾಗುತ್ತದೆ. CGWA ಈ ದೆಸೆಯಲ್ಲಿ ನಾಲ್ಕು ಬಗೆಯ ಪ್ರದೇಶಗಳನ್ನು ಗುರುತಿಸಿರುತ್ತದೆ:- -

**ಸುರಕ್ಷ ಪ್ರದೇಶ** - 4580 ಸುರಕ್ಷ ಯುನಿಟ್ ಗಳು (ಸುರಕ್ಷ ಏಕಾಂಶಗಳು)

**ಅರೆ / ಭಾಗಶಃ ವಿಷಮಾವಸ್ಥೆಯ ಪ್ರದೇಶ** - 697 ಅರೆ ವಿಷಮಾವಸ್ಥೆ ಯುನಿಟ್ ಗಳು ಘಳು

**ವಿಷಮಾವಸ್ಥೆಯ ಪ್ರದೇಶ** - 217 ವಿಷಮಾವಸ್ಥೆ ಯುನಿಟ್ ಗಳು

**ಮಿತಿಮೀರಿ / ಅತಿ ಬಳಕೆಯಾಗಿರುವ ಪ್ರದೇಶಗಳು** - 1071 ಮಿತಿಮೀರಿ ಬಳಕೆ ಯುನಿಟ್ ಗಳು

## ಎನ್ ಒ ಸಿ ಗಳನ್ನು (NOCs ) ಪಡೆಯಲು ಯಾರು ಅನುಮತಿ ನೀಡುವರು?

ಅಧಿಸೂಚನೆಗೆ ಒಳಪಟ್ಟಿರುವ ಪ್ರದೇಶಗಳಲ್ಲಿ ಎನ್ ಒ ಸಿ ಗೆ ಸಂಬಂಧಿಸಿದ ವಿವಾದಗಳೊಂದಿಗೆ ವ್ಯವಹರಿಸಲು ಅಧಿಕಾರಿಗಳು ಅಧಿಕೃತವಾಗಿ ನೇಮಿಸಲ್ಪಟ್ಟಿರುತ್ತಾರೆ. ಈ ಅಧಿಕೃತ ಅಧಿಕಾರಿಗಳು:-

- ಉಪ (ಡೆಪ್ಯುಟಿ)ಕಮಿಶನರ್ / ಜಿಲ್ಲಾ ಮ್ಯಾಜಿಸ್ಟ್ರೇಟ್ / ತಾಲೂಕು ಮಟ್ಟದ ಅಥವಾ ಆಡಳಿತಾತ್ಮಕ ಭಾಗದ ಜಿಲ್ಲಾ ಕಲೆಕ್ಟರ್

- ಸಂಬಂಧಪಟ್ಟ ಪೌರ (ಮುನ್ಸಿಪಲ್) ಪ್ರದೇಶದಲ್ಲಿರುವ ಮುನ್ಸಿಪಾಲಿಟಿಯ ಮುಖ್ಯಾಧಿಕಾರಿ

ಈ ಜಿಲ್ಲಾ ಆಡಳಿತಾತ್ಮಕ ಮುಖ್ಯಾಧಿಕಾರಿಗಳಿಗೆ ನೆರವು ನೀಡಲು ಸಲಹಾ ಸಮಿತಿಗಳಿರುತ್ತವೆ. ಅಂತರ್ಜಲವನ್ನು ಹೊರತೆಗೆಯಲು ಸಲಹಾ ಸಮಿತಿಯೊಂದಿಗೆ ಸಮಾಲೋಚಿಸಿದ ನಂತರ ಅಧಿಕೃತ ಅಧಿಕಾರಿಗಳು ಅನುಮತಿಯನ್ನು, ನೀಡುತ್ತಾರೆ.

ಪ್ರಸ್ತುತದಲ್ಲಿರುವ ಪದ್ಧತಿಯಲ್ಲಿ, ಅಧಿಸೂಚನೆ ಇಲ್ಲದಿರುವ ಪ್ರದೇಶಗಳಿಗೆ ಜಿಲ್ಲಾ ಕಲೆಕ್ಟರ್ ಗಳು ಕೂಡಾ ಎನ್ ಒ ಸಿ ಯನ್ನು ನೀಡುತ್ತಾರೆ.

## ಅಧಿಸೂಚಿತ ಪ್ರದೇಶಗಳಲ್ಲಿ ಅಂತರ್ಜಲವನ್ನು ಹೊರತೆಗೆಯಲು ಯಾರಿಗೆ ಮತ್ತು ಯಾವಾಗ ಅನುಮತಿಯನ್ನು ನೀಡಬಹುದು?

ಸಾರ್ವಜನಿಕ ನೀರಿನ ಸರಬರಾಜು ಇಲ್ಲದಿರುವ ಪರಿಸ್ಥಿತಿಗಳಲ್ಲಿ ಕುಟುಂಬಗಳಿಗೆ ಮತ್ತು ' ಕುಟುಂಬಗಳಲ್ಲದ ಪ್ರತ್ಯೇಕ ಇತರ (ಉದ್ದೇಶ)' ಗಳಿಗಾಗಿ ಮಾತ್ರ ಅನುಮತಿಯನ್ನು ನೀಡಲಾಗುತ್ತದೆ.

'ಪ್ರತ್ಯೇಕ ಕುಟುಂಬಗಳಲ್ಲದ ಇತರ', ಅಂದರೆ, - ಅಧಿಸೂಚಿತ ಪ್ರದೇಶಗಳಲ್ಲಿ 25 ಬಗೆಯ ಮೂಲಭೂತ ಯೋಜನೆಗಳಿರುತ್ತವೆ - ವಾಸಗೃಹಗಳು(ರೆಸಿಡೆನ್ಶಿಯಲ್ ಅಪಾರ್ಟ್ ಮೆಂಟ್ಸ್), ಪಟ್ಟಣದ ನಿವೇಶನಗಳು(ರೆಸಿಡೆನ್ಶಿಯಲ್ ಟೌನ್ ಶಿಪ್), ವ್ಯಾಪಾರ ಸ್ಥಳಗಳು(ಬಿಸ್ ನೆಸ್ಸ್ ಪ್ಲಾಜಾ), ವ್ಯಾಪಾರ ಪ್ರಾಕಾರಗಳು(ಮಾಲ್ಸ್), ಮತ್ತು ಬಹುಘಟಕೀಯ ಸ್ಥಳಗಳು(ಮಲ್ಟಿಪ್ಲೆಕ್ಸ್), ಆಸ್ಪತ್ರೆಗಳು, ಕಛೇರಿ ಕಟ್ಟಡಗಳು, ಶಾಲೆಗಳು, ಕಾಲೇಜ್, ವಿಶ್ವವಿದ್ಯಾನಿಲಯ, ಧಾಮ(ರೆಸಾರ್ಟ್), ಉಪಹಾರ ಗೃಹ (ಹೋಟೆಲ್), ವಿರಾಮ ವಸತಿಗಳು(ಹಾಲಿಡೇ ಹೋಮ್)/ಅತಿಥಿ ಗೃಹ, ಕೈಗಾರಿಕಾ ಪ್ರದೇಶ(ಉದ್ಯಮಕ್ಕಾಗಿ ಬಳಸದ), ಎಸ್ ಇ ಜ಼ೆಡ್ - SEZ(ಉದ್ಯಮಕ್ಕಾಗಿ ಬಳಸದ), ಭೋಜನಕೂಟ ಸಭಾಂಗಣ,ಮೆಟ್ರೋ ನಿಲ್ದಾಣ,ರೈಲು ನಿಲ್ದಾಣ, ಬಸ್ ಡಿಪೋ, ವಿಮಾನ ನಿಲ್ದಾಣ, ಸಮುದ್ರ ತೀರದ ಬಂದರು, ಹೆದ್ದಾರಿ ಯೋಜನೆ, ಅಗ್ನಿಶಾಮಕ ನಿಲ್ದಾಣ, ಗೋದಾಮು, ಮಾಹಿತಿ ತಂತ್ರ ಸಂಕೀರ್ಣ(ಐ ಟಿ ಕಾಂಪ್ಲೆಕ್ಸ್), ಯೋಜನಾತಂತ್ರ ವ್ಯವಸ್ಥೆ(ಲಾಜಿಸ್ಟಿಕ್ಸ್), ಮತ್ತು ಸರಕು.

## ಕೈಗಾರಿಕೆ, ಉದ್ಯಮ ಸಂಸ್ಥೆಗಳಿಗೆ ಅಂತರ್ಜಲವನ್ನು ಹೊರತೆಗೆಯಲು ಇರುವ ಷರತ್ತುಗಳ ಬಗೆಗಳು ಏನೇನು?

- ಕೃತಕವಾಗಿ ಪುನರ್ಭರ್ತಿ ಮಾಡಲು ಹೊರತೆಗೆಯುವ ಅಂತರ್ಜಲದ ನಿರ್ದಿಷ್ಟ ಪರಿಮಾಣವನ್ನು ಸೂಚಿಸುವ ಷರತ್ತುಗಳು.
- ಆವರ್ತಕ್ಕನುಗುಣವಾಗಿ ವರದಿ ಸಲ್ಲಿಸಬೇಕು ಹಾಗೂ ಯಾವ ಕಛೇರಿಯಲ್ಲಿ ಅದನ್ನು ಸಲ್ಲಿಸಬೇಕು, ಇವುಗಳ ಕುರಿತು ಪಾಲಿಸ ಬೇಕಾದ ಷರತ್ತುಗಳು
- ನೀರಿನ ಮರು ಬಳಕೆಗೆ ಮತ್ತು ಬಳಸಿದ ನೀರನ್ನು ಪರಿವರ್ತಿಸಲು ಇರುವ ಷರತ್ತುಗಳ ಪಾಲನೆ.

## ನೀರಿನ ತೀವ್ರ ಬಳಕೆ ಮಾಡುವ ಉದ್ಯಮಗಳೆಲ್ಲಾ ಯಾವ್ಯಾವುದು?

ಕುಡಿಯುವ ನೀರನ್ನು ಪ್ಯಾಕ್ ಮಾಡುವ ಉದ್ಯಮಗಳು, ನೀರಿನಲ್ಲಿ ಖನಿಜಗಳನ್ನು ಸೇರಿಸಿ ಸಂಸ್ಕರಿಸುವ ಘಟಕಗಳು(ಮಿನೆರಲ್ ವಾಟರ್ ಪ್ಲಾಂಟ್), ಚರ್ಮ ಹದ ಮಾಡುವ ಕಾರ್ಖಾನೆಗಳು(ಟ್ಯಾನ್ನೆರಿ), ಬಟ್ಟಿಮನೆಗಳು(ಡಿಸ್ಟಿಲ್ಲೆರಿ), ಬ್ರ್ಯೂಎರಿ ಘಟಕಗಳು, ತಂಪು ಪಾನೀಯ ಘಟಕಗಳು, ಕಾಗದ ಮತ್ತು ಅದರ ಮೆತು ತಿರುಳು(ಪಲ್ಪ್), ಗೊಬ್ಬರ, ಬಟ್ಟೆಗಳಿಗೆ ಬಣ್ಣ ಕಟ್ಟುವ, ಮುದ್ರೆ ಒತ್ತುವ ಮತ್ತು ಬಟ್ಟೆಗಳ ನೂಲು ಸುತ್ತುವ ಘಟಕಗಳು, ಸಕ್ಕರೆ ಕಾರ್ಖಾನೆ, ಹೈನುಗಾರಿಕೆಯ ಉತ್ಪನ್ನಗಳು, ಮನರಂಜನೆಗಾಗಿ ನೀರು ಉದ್ಯಾನವನಗಳು, ಮೋಜಿನ ಕೇಂದ್ರಗಳು(ಅಮ್ಯೂಸ್ ಮೆಂಟ್ ಸೆಂಟರ್).

## ಕರ್ನಾಟಕ ಅಂತರ್ಜಲ ಕಾಯಿದೆ 2011 (ವಿಧಿಯಮನ ಮತ್ತು ಅಭಿವೃದ್ಧಿ ಹಾಗೂ ನಿರ್ವಹಣೆ ನಿಯಂತ್ರಣ), ಇದರ ಪ್ರಕಾರ,

- ನೀರನ್ನು ಹೊರತೆಗೆಯಲು ಅನುಮತಿ: ಅಂತರ್ಜಲದ ಯಾವುದೇ ಬಳಕೆದಾರ ಅಧಿಸೂಚಿತ ಪ್ರದೇಶದಲ್ಲಿ ಯಾವುದೇ ಉದ್ದೇಶಕ್ಕಾಗಿ - ಸ್ವಂತ ಅಥವಾ ಸಮುದಾಯದ ಆಧಾರದ ಮೇಲೆ - ರಂಧ್ರ ಕೊರೆದು ಅಥವಾ ಅಗೆದು ಭಾವಿಯನ್ನು ತೋಡಲು ಬಯಸುವುದಾದರೆ, ಈ ಉದ್ದೇಶಕ್ಕಾಗಿ ಸಂಬಂಧಿತ ಪ್ರಾಧಿಕಾರಕ್ಕೆ ಅಪ್ಪಣೆ ನೀಡುವಂತೆ ಕೋರಿಕೆ ಸಲ್ಲಿಸುವುದು. ಮತ್ತು, ಭಾವಿಗಾಗಿ ರಂಧ್ರ ಕೊರೆಯುವ ಅಥವಾ ಅಗೆಯುವ ಕಾರ್ಯಕ್ಕೆ ಸಂಬಂಧಿಸಿದ ಯಾವುದೇ ಚಟುವಟಿಕೆಯನ್ನು, ಅಧಿಕೃತ ಅಪ್ಪಣೆ ದೊರೆಯದ ಹೊರತು ಮುಂದುವರೆಸುವಂತಿಲ್ಲ.

"Well" "ಭಾವಿ" ಎಂದರೆ, ರಾಜ್ಯ ಸರಕಾರ ಇಲ್ಲವೆ ಕೇಂದ್ರ ಸರಕಾರದ ವತಿಯಿಂದ ವೈಜ್ಞಾನಿಕ ತನಿಖೆ, ಪರಿಶೋಧನೆ, ಅಭಿವೃದ್ಧಿ, ವರ್ಧನೆ, ಸಂರಕ್ಷಣೆ, ಇವೆಲ್ಲವನ್ನು ಹೊರತು ಪಡಿಸಿ ಯಾವುದೇ ಒಬ್ಬ ವ್ಯಕ್ತಿಯು, ಕುಡಿಯಲು, ಗೃಹ ಬಳಕೆ, ಉದ್ಯಮ.ಕೈಗಾರಿಕೆ, ವಾಣಿಜ್ಯ, ಕೃಷಿ - ಈ ಎಲ್ಲದರ ಉದ್ದೇಶಕ್ಕೆ ಬಳಸಲೆಂದು ನೀರನ್ನು ಹುಡುಕಲು ಅಥವಾ ನೀರನ್ನು ಹೊರತೆಗೆಯಲು ನಿರ್ಮಿಸುವ ಒಂದು ರಚನಾ ವ್ಯವಸ್ಥೆಯಾಗಿರುತ್ತದೆ. ತೆರೆದ ಭಾವಿ, ಕೊರೆದ ಭಾವಿ, ಅಗೆದ ಮತ್ತು ಕೊರೆದ ಭಾವಿ, ಕೊಳವೆ ಭಾವಿ, ಶೋಧಕ ರಂಧ್ರ(ಫಿಳ್ಟರ್ ಪಾಇಂಟ್), ಸಂಗ್ರಹಣ ಭಾವಿ, ಅಂತರ್ ವ್ಯಾಪನ ಪಡಸಾಲೆ (ಇನ್ಫಿಲ್ಟ್ರೇಶನ್ ಗ್ಯಾಲರಿ),ಪುನರ್ಭರ್ತಿ ಭಾವಿ, ವಿಲೇವಾರಿ ಭಾವಿ, ಅಥವಾ ಈ ತೆರನ ಭಾವಿಗಳ ವಿವಿಧ ರೀತಿಯ ಸಂಯೋಜಿತ ವ್ಯವಸ್ಥೆ ಅಥವಾ ಭಿನ್ನ ಭಿನ್ನ ರೂಪದ ವ್ಯವಸ್ಥೆಗಳು.

- ಅನುಮತಿಯು ಹಲವು ಷರತ್ತುಗಳಿಗೆ ಒಳಪಟ್ಟಿರುತ್ತದೆ.
- ಪ್ರದೇಶಗಳಿಗೆ ಇಸ್ತಿಹಾರು ಕೊಡುವ(ನೋಟಿಫೈ) ಅಧಿಕಾರ: ಪ್ರಾಧಿಕಾರವು 'ಇಂತಿಂತಹ' ಪ್ರದೇಶಗಳ'ನ್ನು ಅಧಿಸೂಚಿತ ಪ್ರದೇಶಗಳೆಂದು ಪ್ರಕಟ ಪಡಿಸುವಂತೆ ಕೇಂದ್ರ ಸರಕಾರಕ್ಕೆ ಉಪದೇಶಿಸ ಬಹುದು.
- ಅಪರಾಧಗಳು;
- ಪ್ರವೇಶಿಸುವ ಮತ್ತು ಮಾದರಿಗಳನ್ನು (ಸ್ಯಾಂಪಲ್ಸ್) ತೆಗೆದುಕೊಳ್ಳುವ ಅಧಿಕಾರ: ಪ್ರಾಧಿಕಾರ ಅಥವಾ ಅದರಿಂದ ಅನುಜ್ಞೆ ಪಡದಿರುವ ಯಾವುದೇ ವ್ಯಕ್ತಿಗೆ, ಯಾವುದೇ ಒಂದು ಭೂಮಿಕಾಣಿ ಆಸ್ತಿಯ ಪ್ರದೇಶದೊಳಗೆ ಉಚಿತವಾದ ಸಮಯದಲ್ಲಿ ಪ್ರವೇಶಿಸಿ ತನಿಖೆ ಮಾಡಲು ಮತ್ತು ಸಂಬಂಧಿತ ಭೂಮಿಯ ಆಳತೆಯನ್ನು ಅಥವಾ ಮೇಲ್ಮೈ ನೀರಿನ ಇಲ್ಲವೆ ಭೂಮಿಯ ಒಳಭಾಗದ ಅಂತರ್ಜಲದ ಪ್ರಮಾಣವನ್ನು ಅಳೆಯುವ ಅಧಿಕಾರವಿರುತ್ತದೆ. ಆ ವ್ಯಕ್ತಿಯು ಆ ಸ್ಥಳದ ಮಣ್ಣಿನ ಮಾದರಿಗಳನ್ನು ಅಥವಾ ಆ ಭೂಮಿಯಿಂದ ಹೊರತೆಗೆದ ನೀರಿನ ಇತರ ಪದಾರ್ಥಗಳನ್ನು (ತನಿಖೆಗೆ) ತೆಗೆದುಕೊಳ್ಳುವ ಅಧಿಕಾರವನ್ನು ಪಡೆದಿರುತ್ತರೆ.
- ಪರಿಹಾರಗಳು: ಪ್ರಾಧಿಕಾರ ಅಥವಾ ಅದರಿಂದ ಅಧಿಕಾರ ಪಡೆದಿರುವ ವ್ಯಕ್ತಿಯು, ಈ ಕಾಯ್ದೆಯ ನಿಬಂಧನೆಗಳನ್ನು ಅಥವಾ ಕಾಯಿದೆಯಲ್ಲಿ ರೂಪಿಸಿರುವ ನಿಯಮಗಳನ್ನು ಅನುಸರಿಸದೆ ಅಂತರ್ಜಲವನ್ನು ಬಳಕೆ ಮಾಡುವ ವ್ಯಕ್ತಿಗೆ ಅಂತರ್ಜಲವನ್ನು ಹೊರತೆಗೆಯುವ ಕಾರ್ಯವನ್ನು ಸ್ಥಗಿಥ ಗೊಳಿಸಲು ನಿರ್ದೇಶಿಸಬಹಿದು. ಮತ್ತು ಪ್ರಾಧಿಕಾರ ಅಥವಾ ಅದರಿಂದ ಅಧಿಕಾರ ಪಡೆದಿರುವ ವ್ಯಕ್ತಿಯು, ಆ ಕಾರ್ಯಕ್ಕೆ ಒದಗಿಸಿರುವ ವಿದ್ಯುತ್ ಸರಬರಾಜನ್ನು ಕಡಿತಗೊಳಿಸುವಂತೆ ಅಥವಾ, ಅಲ್ಲಿ ಕಾನೂನು ಬಾಹಿರವಾದ ಜಲಚಾಲಿತ ವ್ಯವಸ್ಥೆ (ಸಾಮಗ್ರಿಗಳು) ಕಂಡುಬಂದಲ್ಲಿ ಅವನ್ನು ವಶಪಡಿಸಿಕೊಳ್ಳುವಂತೆ ಸರಕಾರಕ್ಕೆ ನಿರ್ದೇಶಿಸಬಹುದು.
- ಅನುಮತಿಯ ರದ್ಧತಿ: ಅನುಮತಿ ಹೊಂದಿರುವ ವ್ಯಕ್ತಿಯು ಸಂಬಂಧಪಟ್ಟ ಷರತ್ತುಗಳನ್ನು ಪಾಲಿಸುವುದರಲ್ಲಿ ವಿಫಲನಾಗಿರುವುದಾಗಿ ಕಂಡುಬಂದಲ್ಲಿ, ಪ್ರಾಧಿಕಾರವು ಆ ಮುಂಚೆ ನೀಡಿದ್ದ ಅನುಮತಿಯನ್ನು ರದ್ದುಗೊಳಿಸಬಹುದು,
- ಸಂಸ್ಥೆ ಅಥವಾ ಕಂಪೆನಿಗಳಿಂದಾಗುವ ಅಪರಾಧಗಳು: ಈ ಕಾಯಿದೆಯ ಅಡಿಯಲ್ಲಿ ಕಂಪನಿಗಳ ವತಿಯಿಂದ ಅಪರಾಧಗಳು ಎಸಗಿ ಬಂದಾಗ, ಅಪರಾಧವೆಸಗಿದ ಸಮಯದಲ್ಲಿ, ಆ ಕಂಪನಿಯ ಕಾರ್ಯಾಚರಣೆಗೆ ವಾರಸುದಾರರಾಗಿದ್ದ ಪ್ರತಿಯೊಬ್ಬ ವ್ಯಕ್ತಿ ಹಾಗೂ ಆ ಕಂಪನಿಯೂ ಸಹ ಅಪರಾಧವೆಸಗಿದ್ದಕ್ಕೆ ದಂಡಾರ್ಹರೆಂದು ನಿರ್ಣಯಿಸಲಾಗುತ್ತದೆ. ಹಾಗಾಗಿ, ಅವರ ಮತ್ತು ಕಂಪನಿಯ ವಿರುದ್ಧ ಮೊಕದ್ದಮೆ ಹೂಡಿಕೆಗೆ ಆ ವ್ಯಕ್ತಿಗಳು ಮತ್ತು ಕಂಪನಿಯು ಜವಾಬ್ದಾರರಾಗುತ್ತಾರೆ. ತದನಂತರ, ಅದಕ್ಕನುಗುಣವಾಗಿ ಪ್ರತಿಯೊಬ್ಬ ಜವಾಬ್ದಾರ ವ್ಯಕ್ತಿಯು (ತಮ್ಮ ಮತ್ತು ಕಂಪನಿಯ ಪರವಾಗಿ) ಶಿಕ್ಷೆಗೆ ಒಳಗಾಗುತ್ತಾರೆ.
- ದಂಡ: ಸಂಬಂಧಿತ ಕಾಯಿದೆಯ ಅಡಿಯಲ್ಲಿ ಸೆರೆವಾಸಕ್ಕೆ ಮತ್ತು ದಂಡಕ್ಕೆ ಅಥವಾ ಇವೆರಡಕ್ಕೂ ಸೇರಿ ನಿಬಂಧನೆಗಳಿರುತ್ತವೆ.



# 02

# ಅಂತರ್ಜಲ ಮಾಲಿನ್ಯವನ್ನು ತಡೆಯಲು / ಪ್ರತಿಭಟಿಸಲು ಕಾನೂನನ್ನು ಹೇಗೆ ಬಳಸುವುದು

# ಅಂತರ್ಜಲ ಮಾಲಿನ್ಯವನ್ನು ತಡೆಯಲು / ಪ್ರತಿಭಟಿಸಲು ಕಾನೂನನ್ನು ಹೇಗೆ ಬಳಸುವುದು

ಈ ವಿಭಾಗದ ಮುಂಚಿನ ವಿಭಾಗವು ನೀರಿನ ಮಾಲಿನ್ಯವನ್ನು ಎದುರಿಸಲು ಬಳಸಬಹುದಾದ ವಿವಿಧ ಕಾನೂನುಗಳನ್ನು ವಿವರಿಸುತ್ತದೆ. ಆದರೆ, ಬರೇ ಕಾನೂನನ್ನು ಮಾತ್ರ ತಿಳಿದಿರುವುದು ಸಾಲದು. ಕಾನೂನುಗಳನ್ನು ಸರಿಯಾದ ಕ್ರಮದಲ್ಲಿ ಬಳಸದೆ ಇದ್ದಲ್ಲಿ ಪರಿಣಾಮಕಾರಿ ಪರಿಹಾರಗಳನ್ನು ಪೂರೈಸುವುದು ಕಷ್ಟಕರ. ಅಂತೆಯೆ, ಈ ಉಪವಿಭಾಗದಲ್ಲಿ ಕಾನೂನನ್ನು ಬಳಸುವ ಮಾರ್ಗಗಳನ್ನು ಪಟ್ಟಿ ಮಾಡಲಾಗಿದೆ.



## ನಿದರ್ಶನಗಳನ್ನು ಸಂಕಲಿಸುವುದು (ಸಂಗ್ರಹಿಸುವುದು)

### A. ದಾಖಲೆಗಳು

| ದಾಖಲೆಗಳ ನಮೂನೆ | ಲಭ್ಯವಿರುವ ಸ್ಥಳ | ಯಾವುದಕ್ಕೆ ಉಪಯುಕ್ತ(ವಾದದ್ದು) |
|---|---|---|
| ಎನ್ ಒ ಸಿ(NOC) | ಸಿ ಜಿ ಡಬ್ಲ್ಯು ಎ(CGWA),<br>ಜಿಲ್ಲಾ ಕಲೆಕ್ಟರ್ ಕಛೇರಿ | ಸಿ ಜಿ ಡಬ್ಲ್ಯು ಎ(CGWA), ಜಿಲ್ಲಾ ಕಲೆಕ್ಟರ್ ಕಛೇರಿ |
| ಅಂತರ್ಜಲದ ಮೇಲ್ವಿಚಾರಣೆ ಮತ್ತು ಅನುಸರಣೆ ವರದಿಗಳು | ಸಿ ಜಿ ಡಬ್ಲ್ಯು ಎ(CGWA),<br>ಸಿ ಜಿ ಡಬ್ಲ್ಯು ಬಿ(CGWB) | ಅಂತರ್ಜಲದ ಗುಣಮಟ್ಟ ಮತ್ತು ಪರಿಮಾಣವನ್ನು ಕಂಡುಕೊಳ್ಳಲು |
| ಇ ಸಿ (EC) | ವರ್ಗ (ಕ್ಯಾಟಗರಿ) A:<br>ಎಮ್ ಒ ಇ ಎಫ್ ಸಿ ಸಿ (MoEFCC)<br><br>ವರ್ಗ (B) ಬಿ: ರಾಜ್ಯ ಮಟ್ಟದ ಪರಿಸರ ಪರಿಣಾಮ ಮೌಲ್ಯೀಕರಣ ಪ್ರಾಧಿಕಾರ, (ಎಸ್ ಇ ಐ ಎ ಎ = SEIAA)<br><br>ವರ್ಗ(ಕ್ಯಾಟಗರಿ) (B) ಬಿ2 (ಲಘು ಖನಿಜಗಳು): ಜಿಲ್ಲಾ ಮಟ್ಟದ ಪರಿಸರ ಪರಿಣಾಮ ಮೌಲ್ಯೀಕರಣ ಪ್ರಾಧಿಕಾರ, (ಡಿ ಇ ಐ ಎ ಎ = DEIAA)<br><br>ಎಸ್ ಪಿ ಸಿ ಬಿ ಗಳಲ್ಲಿ(SPCBs) ಸಹ ಲಭ್ಯವಿರುತ್ತದೆ. | • ಅಂತರ್ಜಲ ಬಳಕೆಯ ಕುರಿತು ಷರತ್ತುಗಳಿರುತ್ತವೆ.<br>• ಈ ಷರತ್ತುಗಳನ್ನು ಓದಿ ಅರಿತ್ತಿದ್ದರೆ, ಅವುಗಳನ್ನು ಅನುಸರಿಸಲಾಗುತ್ತಿದೆಯೆ ಎಂದು ಪರಿಶೀಲಿಸಲು ಅವು ಉಪಯುಕ್ತವಾಗಿರುತ್ತವೆ. |
| ಸಿ ಟಿ ಒ (CTO)<br>ಸಿ ಟಿ ಇ (CTE) | ಎಸ್ ಪಿ ಬಿ ಸಿ(SPCB) | • ವಿಸರ್ಜನೆಯ ಸ್ಥಳ / ಹೊರದಾರಿಯನ್ನು ಗುರುತಿಸುವುದು<br>• ಬಿಡುಗಡೆ ಮಾಡಿರುವ ಹೊರಸೂಸುವಿನ ಗುಣಲಕ್ಷಣದ ಸ್ವರೂಪ ಮತ್ತು (ಅದರ) ಸಂಯೋಜನೆ<br>• ಅಂತರ್ಜಲದ ಬಳಕೆ ಮತ್ತು ವಿಸರ್ಜನೆಯ ವಿವರಗಳು<br>• ಅಂತರ್ಜಲ ಮಾಲಿನ್ಯದ ವಿಷಯದಲ್ಲಿ ಈ ಷರತ್ತುಗಳನ್ನು ನೋಡುವುದು ಉಪಯುಕ್ತ |

| ದಾಖಲೆಗಳ ನಮೂನೆ | ಲಭ್ಯವಿರುವ ಸ್ಥಳ | ಯಾವುದಕ್ಕೆ ಉಪಯುಕ್ತ(ವಾದದ್ದು) |
|---|---|---|
| ಇ ಸಿ (EC) ವರದಿಗಳ ಮೇಲ್ವಿಚಾರಣೆ ಮತ್ತು ಅನುಸರಣೆ | ಎಮ್ ಒ ಇ ಎಫ್ ಸಿ ಸಿ (MOEFCC) ಪ್ರಾದೇಶಿಕ ಕಛೇರಿಗಳು | ನೀರಿನ ವಿಸರ್ಜನೆಗೆ ಆ ಮೊದಲೆ ನಮೂದಿಸಿರುವ ಷರತ್ತುಗಳ ಅನುಸರಣೆ ಆಗಿದೆಯೆ ಇಲ್ಲವೆ ಎಂಬುದನ್ನು ಕಂಡುಕೊಳ್ಳುವುದು ಉಚಿತ |
| ಈ ಮುಂಚೆ ನೀಡಿದ್ದ ಸಮರ್ಪಕ ಕಾರಣಗಳ ನೋಟೀಸ್ (ಶೋಕಾಝ್ ನೋಟೀಸ್), ಉಪ ಸಂಹಾರ / ಮುಕ್ತಾಯ, ಇವುಗಳಿಗೆ ನೀಡಿರುವ ಆದೇಶದ ಅಧಿಸೂಚನೆ | ಎಸ್ ಪಿ ಸಿ ಬಿ SPCB | ಈ ಷರತ್ತುಗಳ ಕುರಿತು ಸಂಸ್ಥೆಯ(ಕಂಪನಿಯ) ವಿರುದ್ಧ ಆ ಹಿಂದೆ ಸೂಚನಾ ಪತ್ರಗಳನ್ನು ಹೊರಡಿಸಲಾಗಿತ್ತೆ ಎಂದು ಕಂಡುಕೊಳ್ಳುವುದು ಉಚಿತ. |



## A. ಛಾಯಾ ಚಿತ್ರಗಳ ಮತ್ತು ವಿಡಿಯೊ ತುಣುಕುಗಳು :

ಛಾಯಾಚಿತ್ರದ ನಿದರ್ಶನಗಳ ಮೂಲಕ ವಾಸ್ತವ ಸನ್ನಿವೇಶ ಏನು ಮತ್ತು ಹೇಗಿದೆ ಎಂದು ಬಿಂಬಿಸಲು ಛಾಯಾಚಿತ್ರಗಳು ಉಪಯುಕ್ತವಾಗಿರುತ್ತವೆ . ಛಾಯಾಚಿತ್ರಗಳನ್ನು ತೆಗೆದ ಮತ್ತು ವಿಡಿಯೊವನ್ನು ತೆಗೆದ ಸಮಯ ಮತ್ತು ತಾರೀಖನ್ನು ದಾಖಲಿಸುವುದು ಇಲ್ಲಿ ಬಹು ಮುಖ್ಯ.



## B. ದಿನ ಪತ್ರಿಕೆಗಳ ವರದಿಗಳು:

ಇಂತಹ ವಿಷಯ/ಗಳು ದಿನ ಪತ್ರಿಕೆಗಳಲ್ಲಿ ವರದಿಯಾಗಿದ್ದಲ್ಲಿ, ದೂರನ್ನು ಬೆಂಬಲಿಸಲು ಅವು ಹೆಚ್ಚುವರಿ ನಿದರ್ಶನಗಳಂತಾಗುತ್ತವೆ. ಆದಾಗ್ಯೂ, ದಿನ ಪತ್ರಿಕೆಯಲ್ಲಿ ವರದಿಯಾಗಿರುವುದನ್ನು ನಿದರ್ಶನವಾಗಿ ಬಳಸುವ ಮುನ್ನ, ಪ್ರಸ್ತುತ ವರದಿಯು ಅಧಿಕೃತವಾಗಿದೆಯೆ ಹಾಗೂ ನ್ಯಾಯಸಮ್ಮತವಾಗಿ ಸ್ಥಿರೀಕರಿಸಲಾಗಿದೆಯೆ ಎಂದು ಖಚಿತ ಪಡಿಸಿ ಕೊಳ್ಳಬೇಕು.

# II. ದೂರುಗಳ ಅಳವಡಿಕೆ / ರೂಪಣ



## ಯಾವಾಗ ದೂರನ್ನು ದಾಖಲಿಸ ಬಹುದು?

ದೂರನ್ನು ಈ ಕೆಳಗಿನ ಸಂದರ್ಭಗಳಲ್ಲಿ ಮಾಡಬಹುದು:

- ಅನುಮತಿಯನ್ನು ಕೇಳಿ ಪಡೆಯದೆ ಇದ್ದಾಗ;
- ನಿರ್ದಿಷ್ಟವಾಗಿ ನಮೂದಿಸಿದ ಷರತ್ತುಗಳ ಉಲ್ಲಂಘನೆ ಆಗಿದ್ದಲ್ಲಿ;
- ಜಲ ಕಾಯ್ದೆಯ ಅಡಿಯಲ್ಲಿರುವ ಕಟ್ಟಳೆಗಳ ಉಲ್ಲಂಘನೆ ಆಗಿದ್ದಲ್ಲಿ.



## ದೂರು ಏನೇನನ್ನು ಒಳಗೊಂಡಿರಬೇಕು?

- ಉಲ್ಲಂಘನೆಯ ಸ್ವರೂಪ;
- ಸುತ್ತಮುತ್ತಲಿನ ಜನಗಳ ಮೇಲೆ ಉಲ್ಲಂಘನೆಯಿಂದಾಗಿರುವ ಪರಿಣಾಮ;
- (ದೂರನ್ನು) ಬೆಂಬಲಿಸುವ ನಿದರ್ಶನಗಳು;
- ಕೋರಿರುವ ಪರಿಹಾರದ ಮಂಡನೆ

## ದೂರನ್ನು ಯಾರಿಗೆ ಕಳುಹಿಸಬೇಕು?

| | |
|---|---|
| ಸಿ ಟಿ ಒ (CTO), ಸಿ ಟಿ ಇ(CTE) ಮತ್ತು ಜಲ ಅಧಿನಿಯಮದ ಕಟ್ಟಳೆಗಳ ಉಲ್ಲಂಘನೆ | ಎಸ್ ಪಿ ಸಿ ಬಿ ಯ ( SPCB) ಯಾವುದೇ ಒಂದು ಪ್ರಾದೇಶಿಕ ಕಛೇರಿ |
| | ಎಸ್ ಪಿ ಸಿ ಬಿ ಯ ( SPCB) ಪ್ರಧಾನ ಕಛೇರಿ |
| ಇ ಸಿ(EC) ಷರತ್ತುಗಳ ಉಲ್ಲಂಘನೆ | ಎಮ್ ಒ ಎಫ್ ಸಿ ಸಿ ಯ(MoEFCC) ಪ್ರಾದೇಶಿಕ ಕಛೇರಿ |
| | ಎಸ್ ಇ ಐ ಎ ಎ (SEIAA) |
| | ಡಿ ಇ ಐ ಎ ಎ (DEIAA) |
| ಸಾರ್ವಜನಿಕ ಉಪದ್ರವ | ಜಿಲ್ಲಾ ಕಲೆಕ್ಟರ್ / ಮ್ಯಾಜಿಸ್ಟ್ರೇಟ್ |
| ಕಾನೂನಿಗೆ ವಿರುದ್ಧವಾಗಿ ಅಂತರ್ಜಲ ಬಳಕೆ | ಸಿ ಜಿ ಡಬಲ್ಯು ಎ (CGWA) ಪ್ರಾದೇಶಿಕ ಕಛೇರಿಗಳು |
| ಅಂತರ್ಜಲ ಹೊರತೆಗೆಯುವಿಕೆಗೆ ಎನ್ ಒ ಸಿ (NOCs) ಗಳ ಅನನುಸರಣೆ | ಜಿಲ್ಲಾ ಕಲೆಕ್ಟರ್ |

## ಲಭ್ಯವಿರುವ ಪರಿಹಾರಗಳೇನು?

| ಸನ್ನಿವೇಶ | ಲಭ್ಯವಿರುವ ಪರಿಹರ |
|---|---|
| ಅಂತರ್ಜಲ ಹೊರತೆಗೆಯುವಿಕೆಗೆ ಎನ್ ಒ ಸಿ (NOC) ಯ ಅನನುಸರಣೆ | • ಮಾರ್ಗ ಸೂಚಿಗಳಲ್ಲಿ ವಿವರಿಸಿರುವ ಅಧಿಸೂಚನೆಯುಳ್ಳ ಹಾಗೂ ಅಧಿಸೂಚನೆ ಇಲ್ಲದ ಪ್ರದೇಶಗಳಲ್ಲಿ ಹೊರಡಿಸಿದ್ದ ಎನ್ ಒ ಸಿಯನ್ನು ರದ್ದುಪಡಿಸುವುದು ಅಥವಾ ಮುಂದುವರಿಸದ ಕ್ರಮಕ್ಕೆ ಈಡಾಗಬಹುದು.<br>• ಅಧಿಸೂಚನೆಯುಳ್ಳ ಪ್ರದೇಶಗಳಲ್ಲಿ ಅನನುಸರಣೆ ಆಗಿದ್ದಲ್ಲಿ, ಪರಿಸರ ಸಂರಕ್ಷಣೆ ಕಾಯಿದೆಯಡಿಯಲ್ಲಿ ಇನ್ನೂ ಹೆಚ್ಚಿನ ದಂಡವನ್ನು ವಿಧಿಸ ಬಹುದು. |
| ತುರ್ತು ಪರಿಸ್ಥಿತಿ (ವಿಷಪೂರಿತ, ಹಾನಿಕಾರಕ, ಮಾಲಿನ್ಯ ಗೊಳಿಸುವ ಪದಾರ್ಥಗಳು ಯಾವುದೆ ಹೊಳೆ, ಬಾವಿ ಅಥವಾ ಭೂ ಪ್ರದೇಶದಲ್ಲಿ ಇವೆ, ಅಥವಾ ಇವುಗಳೊಳಗೆ ಅವನ್ನು ವಿಸರ್ಜಿಸಲಾಗುತ್ತಿದೆ, ಅಥವಾ ಯಾವುದೆ ಅಪಘಾತವುಂಟಾಗಿ ಹೊಳೆ,ಬಾವಿಯೊಳಗೆ (ಅವು) ಪ್ರವೇಶಿಸಿದ್ದರೆ, ಅಥವಾ ಇನ್ನಿತರ ಅನಿರೀಕ್ಷಿತ ಕ್ರಿಯೆ ಅಥವಾ ಘಟನೆ ಉಂಟಾದರೆ, ಮಂಡಲಿಯು ಅವಶ್ಯಕ ಅಥವಾ ಯಥೋಚಿತ ಕ್ರಮವನ್ನು ಒಡನೆ ತೆಗೆದು ಕೊಳ್ಳುವುದು ಅವಶ್ಯ ಅಥವಾ ಅನುಕೂಲಕರವೆಂದು ರಾಜ್ಯ ಮಟ್ಟದ ಮಂಡಲಿಯ ಅಭಿಪ್ರಾಯಪಟ್ಟರೆ) | • ಮಾಲಿನ್ಯವನ್ನುಂಟುಮಾಡಿರುವ ಪ್ರದಾರ್ಥವನ್ನು ಹೊಳೆ, ಬಾವಿ ಮತ್ತು ಭೂ ಪ್ರದೇಶದಿಂದ ತೆಗೆದು ತಕ್ಕ ರೀತಿಯಲ್ಲಿ ವಿಲೆವಾರಿ ಮಾಡುವುದು.<br>• ಈ ತರಹದ ಪದಾರ್ಥ ಗಳಿಂದ ಆಗಿರುವ ಮಾಲಿನ್ಯವನ್ನು ನಿವಾರಿಸ ಬಹುದು ಅಥವಾ ತಗ್ಗಿಸ ಬಹುದು<br>• ಸಂಬಂಧಿತ ವ್ಯಕ್ತಿಗೆ ವಿಸರ್ಜನೆ ಮಾಡದಂತೆ ತಡೆಯಾಜ್ಞೆಯ ಅಥವಾ ನಿರ್ಬಂದನೆಗೊಳ ಪಡಿಸುವ ಆದೇಶವನ್ನು ಹೊರಡಿಸಬಹುದು. |
| ಸಾರ್ವಜನಿಕ ಉಪ ದ್ರವ | ಜಿಲ್ಲಾ ಕಲೆಕ್ಟರ್ ಅವರ ಆದೇಶವನ್ನು ಜಾರಿಗೊಳಿಸುವುದು |
| ಯಾವುದೇ ರೀತಿಯ ಸಮ್ಮತಿಯಿಲ್ಲದೆ ಕಾರ್ಯಾಚರಣೆ / ಕಾರ್ಯ ನಿರ್ವಹಣೆ | ಕಾರ್ಯಚರಣೆಯ ಕುರಿತು ಇರುವ ನಿರ್ದಿಷ್ಟ ಷರತ್ತುಗಳನ್ನು ಉಲ್ಲೇಖಿಸಿರುವ ಎಸ್ ಪಿ ಸಿ ಬಿ ಯಿಂದ ಅಧಿಸೂಚನೆಯನ್ನು ಜಾರಿಗೊಳಿಸ ಬೇಕು |
| ಅನುಮತಿಯಲ್ಲಿ ನಮೂದಿಸಿರುವ ಷರತ್ತುಗಳ ಅನನುಸರಣೆ | • ಎಸ್ ಪಿ ಬಿ ಸಿ ಯಿಂದ ಶೋ ಕಾಜ್ ನೋಟೀಸ್ ಜಾರಿ.<br>• ಎಸ್ ಪಿ ಸಿ ಬಿ ಯಿಂದ ಕಾರ್ಯವನ್ನು ನಿಲ್ಲಿಸುವಂತೆ ಆದೇಶವನ್ನು ಹೊರಡಿಸುವುದು |
| ಶೋ ಕಾಜ್ ನೋಟೀಸ್ ಗೆ / ಅದರಲ್ಲಿ ಹೇಳಿರುವ ಪ್ರಮಾಣ ವಚನದ ಉಲ್ಲಂಘನೆಯಾಗಿರುವ ನೋಟಿಸ್ ಗೆ ಪ್ರತಿಕ್ರಯಿಸದೆ ಇರುವುದು | • ಮಾಲಿನ್ಯವನ್ನುಂಟು ಮಾಡುತ್ತಿರುವ ಚಟುವಟಿಕೆಯ ಮುಚ್ಚುವಿಕೆ,, ನಿರ್ಬಂಧನೆ, ಅಥವಾ ಕ್ರಮಬದ್ಧ ಗೊಳಿಸುವಿಕೆ<br>• ನೀರು, ವಿದ್ಯುತ್ ಸರಬರಾಜು ಅಥವಾ ಈ ರೀತಿಯ ಇನ್ನಿತರ ಸೇವೆಗಳನ್ನು ಸ್ಥಗಿತಗೊಳಿಸುವುದು |
| ಜಲ ಅಧಿನಿಯಮದ ಅಡಿಯಲ್ಲಿ ನೀಡಿರುವ ನಿರ್ದೇಶನಗಳನ್ನು ಅನುಸರಿಸುವುದರಲ್ಲಿ ವೈಫಲ್ಯ. | ಸೆರವಾಸ, ಅಥವಾ / ಮತ್ತು ದಂಡಕ್ಕೆ, ಶಿಕ್ಷಾರ್ಹ ವಾದದ್ದು. |
| ಇ ಸಿ ಯಲ್ಲಿ ನಿರ್ದಿಷ್ಟ ಪಡಿಸಿರುವ ಷರತ್ತುಗಳ ಅನನುಸರಣೆ | • ಇ ಪಿ ಎ 1986 ಪ್ರಕಾರ ಸೆರೆವಾಸ ಮತ್ತು ದಂಡ ಇವುಗಳ ಮೂಲಕ ಶಿಕ್ಷಾರ್ಹ. ಇದರ ಅರ್ಥ - ೫ ವರ್ಷಗಳ ಸೆರೆವಾಸ ಅಥವಾ 1 ಲಕ್ಷ ರೂಪಾಯಿಗಳ ದಂಡ ಅಥವಾ ಅವೆರಡೂ ಕೂಡಿದಂತೆ ಶಿಕ್ಷೆ<br>• ಅನನುಸರಣೆಯ ಫಲವಾಗಿ ಇ ಸಿ ಯ ವಾಪಸಾತಿ |

ಹಕ್ಕು ನಿರಾಕರಣೆ ಹೇಳಿಕೆ: ಅಧಿಸೂಚನೆಯ ಮಾರ್ಗದರ್ಶಕ ಕರಡುಪ್ರತಿಯನ್ನು 11.10.2017 ರಂದು ಹೊರಡಿಸಿರುವ ಕಾರಣ ಈ ಮೇಲಿನ ವಿಷಯವು ಬದಲಾವಣೆಗೆ ಒಳಪಟ್ಟಿರುತ್ತದೆ.

ಸಮುದಾಯ ಮಟ್ಟದ ಪರಿಸರ ನ್ಯಾಯ ವೃತ್ತಿಪರರು ಅಥವಾ ನೆಲಮಟ್ಟದ ಪರಿಸರ ಕಾನೂನು ಸಂಯೋಜಕರು ಕಾನೂನು ಜಾಗ್ರತಿ ಹಾಗೂ ಸಬಲೀಕರಣ ಬಳಸಿ ತೊಂದರೆಗೆ ಒಳಗಾದ ಸಮುದಾಯಗಳಿಗೆ ಆಡಳಿತಾತ್ಮಕ ಮಾರ್ಗದ ಮೂಲಕ ಕಾನೂನು ಬದ್ದ ಪರಿಹಾರಗಳನ್ನು ಹುಡುಕಿಕೊಡುವಲ್ಲಿ ನೆರವಾಗುತ್ತಾರೆ. ಈ ಕೈಪಿಡಿಯು ಆಂತಹ ವೃತ್ತಿಪರರಿಗೆ ಕಾನೂನಿನ ವಿಧಿಗಳು ಮತ್ತೂ ಸಾಂಸ್ಥಿಕ ಮಾರ್ಗವನ್ನು ಬಳಕೆ ಮಾಡಲು ಸಹಾಯವಾಗುವ ಮಾರ್ಗಸೂಚಿಯಾಗಿರುತ್ತದೆ. ಈ ಕೈಪಿಡಿಯು ಕೆಲವು ಸಮಸ್ಯೆಯ ಪ್ರಕಾರಗಳನ್ನು ಒಳಗೊಂಡಿರುವ ಸನ್ನಿವೇಶಗಳು, ಪರಿಸರ ನ್ಯಾಯ ವೃತ್ತಿಪರರ ಬಳಿಗೆ ಸಾಮಾನ್ಯವಾಗಿ ಬರುವಂತಹ ದೂರುಗಳು ಹಾಗೂ ಕಾನೂನು ಬದ್ದ ವಿಧಿಗಳು ಮತ್ತೂ ಆಯಾ ದೂರಿಗೆ ಕಾನೂನು ಬದ್ದ ಪರಿಹಾರಗಳನ್ನು ಪಡೆದುಕೊಳ್ಳಬಹುದಾದ ಸಂಸ್ಥೆಗಳ ಬಗ್ಗೆ ಮಾಹಿತಿಯನ್ನು ಒದಗಿಸುತ್ತದೆ. ಈ ಕೈಪಿಡಿಯಲ್ಲಿ ಪ್ರಸ್ತುತಪಡಿಸಿರುವ ಸನ್ನಿವೇಶಗಳು ವಿವರಾಣಾತ್ಮಕವಾಗಿರುತ್ತದೆ ಹಾಗೂ ಇವುಗಳನ್ನು ಸೆಂಟರ್ ಪಾರ್ ಪೊಲಿಸಿ ರಿಸರ್ಚ್ - ನಮತಿ ಪರಿಸರ ನ್ಯಾಯ ಯೋಜನೆಯೊಂದಿಗೆ ಪರಿಸರ ಕಾನೂನು ಸಂಯೋಜಕರು ಹಲವು ಸಂದರ್ಭಗಳಲ್ಲಿ ಪರಿಹಾರ ಕಂಡುಕೊಳ್ಳಲು ನಡೆಸುತ್ತಿರುವ ದೃಷ್ಟಾಂತಗಳಿಂದ ಆಯ್ದು ಕೊಳ್ಳಲಾಗಿರುತ್ತದೆ.

## ಸೆಂಟರ್ ಪಾರ್ ಪೊಲಿಸಿ ರಿಸರ್ಚ್ ಸಂಸ್ಥೆಯ ಬಗ್ಗೆ:

ಸೆಂಟರ್ ಪಾರ್ ಪೊಲಿಸಿ ರಿಸರ್ಚ್ 1973 ರಿಂದ ಭಾರತದ ಪ್ರಮುಖ ಸಾರ್ವಜನಿಕ ನೀತಿ ಚಿಂತನಾ ಸಂಸ್ಥೆಯಾಗಿದೆ. ಈ ಕೇಂದ್ರವು ಲಾಭರಹಿತ ಸ್ವತಂತ್ರ ಸಂಸ್ಥೆಯಾಗಿದೆ ಹಾಗೂ ಭಾರತದಲ್ಲಿ ನೀತಿ ರಚನೆ ಹಾಗೂ ಪ್ರಕ್ರಿಯೆಯ ಕುರಿತು ಸಾರ್ವಜನಿಕ ವಲಯದಲ್ಲಿ ಹೆಚ್ಚು ಪ್ರಚಲಿತವಾಗಿ ಈ ಮೂಲಕ ಭಾರತದಲ್ಲಿ ಜೀವನವನ್ನು ರೂಪಿಸುವ ನಿಟ್ಟಿನಲ್ಲಿ ಸಂಶೊಧನೆ ಅಧ್ಯಯನಗಳನ್ನು ನಡೆಸುವುದುಕ್ಕೆ ಮುಡಿಪಾಗಿದೆ,

www.cprindia.org

## ನಮತಿ ಬಗ್ಗೆ:

ಕಾನೂನಿನ ರಕ್ಷಣೆಯಿಂದ ಹೊರಗೆ 100 ಕೋಟಿಗೂ ಹೆಚ್ಚು ಜನರು ವಾಸಿಸುತ್ತಿರುವ ಈ ಜಗತ್ತಿನಲ್ಲಿ ನಮತಿ ಸಂಸ್ಥೆಯು ಕಾನೂನನ್ನು ಜನರ ಕೈಗೆ ತಲುಪಿಸುವಲ್ಲಿ ಮುಡಿಪಾಗಿದೆ. ನ್ಯಾಯವನ್ನು ಮುನ್ನೆಡಸಲು ಅದು ಸಮುದಾಯಗಳೊಂದಿಗೆ ಕೆಲಸ ಮಾಡುವ ನೆಲಮಟ್ಟದ ನ್ಯಾಯವಾದಿ ವೃತ್ತಿಪರರೊಂದಿಗೆ ಜಾಗತಿಕ ಆಂದೋಲನವನ್ನು ನಿರ್ಮಿಸುತ್ತಿದೆ. ಈ ನ್ಯಾಯವಾದಿಗಳು, ಜನರು ಅವರ ಭೂಮಿಯನ್ನು ರಕ್ಷಿಸುವುದು, ಅಗತ್ಯ ಸೌಲಭ್ಯಗಳನ್ನು ಪಡೆದುಕೊಳ್ಳುವುದು ಹಾಗೂ ಅವರ ಜೀವನದ ಮೆಲೆ ಪ್ರಭಾವ ಬೀರುವ ನಿರ್ಣಯಗಳನ್ನು ತೆಗೆದುಕೊಳ್ಳುವಲ್ಲಿ ಭಾಗಿ ಆಗುವುದನ್ನು ಖಚಿತಪಡಿಸಿಕೊಳ್ಳುವ ನಿಟ್ಟಿನಲ್ಲಿ ಮೆಲ್ಪಂಕ್ತಿಯಲ್ಲಿ ಹೊರಾಡುತ್ತಿದ್ದಾರೆ.

www.namati.org

CENTRE FOR POLICY RESEARCH

NAMATI
INNOVATIONS IN LEGAL EMPOWERMENT